ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ಸರ್ವೇ ಸಮಸ್ಯೆ ಹಾಗೂ ಸರ್ವೇಯರ್ಸ್ ನೇಮಕಾತಿ ಬಗ್ಗೆ

ಶ್ರೀಕವಟಗಿಮಠಮಹಾಂತೇಶಮಲ್ಲಿಕಾರ್ಜುನ(ಸ್ಥಳೀಯಸಂಸ್ಥೆಗಳಕ್ಷೇತ್ರ):-

197 (393) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಂದಾಯ ಇಲಾಖೆಯಲ್ಲಿ ಕಳೆದ ಹಲವಾರು ವರ್ಷಗಳಿಂದ ಸರ್ವೇ ಕೆಲಸ ಬಾಕಿ ಇದ್ದು, ಇದರಿಂದಾಗಿ ಸಾರ್ವಜನಿಕರು ಎದುರಿಸುತ್ತಿರುವ ಸಮಸ್ಯೆ ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಇಲಾಖೆಗೆ ಒಟ್ಟು ಮಂಜೂರಾಗಿರುವ ಸರ್ವೇಯರ್‍ಗಳ ಸಂಖ್ಯೆ ಎಷ್ಟು; ಆ ಪೈಕಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವವರ ಸಂಖ್ಯೆ ಎಷ್ಟು;

(ಇ) ಇದರಲ್ಲಿ ಎಷ್ಟು ಮಂದಿ ಸರ್ಕಾರಿ ಸರ್ವೇಯರ್‍ಗಳಿದ್ದಾರೆ ಎಷ್ಟು; ಮಂದಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದಾರೆ;

(ಈ) ರಾಜ್ಯದಲ್ಲಿನ ಸರ್ವೇ ಸಮಸ್ಯೆಯನ್ನು ಪರಿಹರಿಸಲು ಸರ್ಕಾರ ಸರ್ವೇಯರ್‍ಗಳ ನೇಮಕಾತಿ ಪ್ರಕ್ರಿಯೆ ನಡೆಸುವ ಯೋಜನೆ ಮಾಡಿದೆಯೇ;

(ಉ) ಮಾಡಿದ್ದಲ್ಲಿ, ಯಾವ ಕಾಲಮಿತಿಯೊಳಗೆ ನೇಮಕಾತಿ ಪ್ರಕ್ರಿಯೆ ಪೂರ್ಣಗೊಳಿಸಲಾಗುವುದು ?